ಸಪದಿ ಸಖಿವಚೋ ನಿಶಮ್ಯ ಮಧ್ಯೇ
ನಿಜಪರಯೋರ್ಬಲಯೋ ರಥಂ ನಿವೇಶ್ಯ ।
ಸ್ಥಿತವತಿ ಪರಸೈನಿಕಾಯುರಕ್ಷ್ಣಾ
ಹೃತವತಿ ಪಾರ್ಥಸಖೇ ರತಿರ್ಮಮಾಸ್ತು ॥ ೩೫ ॥

ವ್ಯವಹಿತಪೃತನಾಮುಖಂ ನಿರೀಕ್ಷ್ಯ
ಸ್ವಜನವಧಾದ್ವಿಮುಖಸ್ಯ ದೋಷಬುದ್ಧ್ಯಾ ।
ಕುಮತಿಮಹರದಾತ್ಮವಿದ್ಯಯಾ ಯ-
ಶ್ಚರಣರತಿಃ ಪರಮಸ್ಯ ತಸ್ಯ ಮೇಽಸ್ತು ॥ ೩೬ ॥

ಸ್ವನಿಗಮಮಪಹಾಯ ಮತ್ಪ್ರತಿಜ್ಞಾಮ್
ಋತಮಧಿಕರ್ತುಮವಪ್ಲುತೋ ರಥಸ್ಥಃ ।
ಧೃತರಥಚರಣೋಽಭ್ಯಯಾಚ್ಚಲದ್ಗು-
ರ್ಹರಿರಿವ ಹಂತುಮಿಭಂ ಗತೋತ್ತರೀಯಃ ॥ ೩೭ ॥

ಶಿತವಿಶಿಖಹತೋ ವಿಶೀರ್ಣದಂಶಃ
ಕ್ಷತಜಪರಿಪ್ಲುತಆತತಾಯಿನೋ ಮೇ ।
ಪ್ರಸಭಮಭಿಸಸಾರ ಮದ್ವಧಾರ್ಥಂ
ಸ ಭವತು ಮೇ ಭಗವಾನ್ಗತಿರ್ಮುಕುಂದಃ ॥ ೩೮ ॥

ವಿಜಯರಥಕುಟುಂಬ ಆತ್ತತೋತ್ರೇ
ಧೃತಹಯರಶ್ಮಿನಿ ತಚ್ಛ್ರಿಯೇಕ್ಷಣೀಯೇ ।
ಭಗವತಿ ರತಿರಸ್ತು ಮೇ ಮುಮೂರ್ಷೋ-
ರ್ಯಮಿಹ ನಿರೀಕ್ಷ್ಯ ಹತಾ ಗತಾಃ ಸರೂಪಮ್ ॥ ೩೯ ॥

ಲಲಿತಗತಿವಿಲಾಸವಲ್ಗುಹಾಸ-
ಪ್ರಣಯನಿರೀಕ್ಷಣಕಲ್ಪಿತೋರುಮಾನಾಃ ।
ಕೃತಮನುಕೃತವತ್ಯ ಉನ್ಮದಾಂಧಾಃ
ಪ್ರಕೃತಿಮಗನ್ಕಿಲ ಯಸ್ಯ ಗೋಪವಧ್ವಃ ॥ ೪೦ ॥

ಮುನಿಗಣನೃಪವರ್ಯಸಂಕುಲೇಽಂತಃ-
ಸದಸಿ ಯುಧಿಷ್ಠಿರರಾಜಸೂಯ ಏಷಾಮ್ ।
ಅರ್ಹಣಮುಪಪೇದ ಈಕ್ಷಣೀಯೋ
ಮಮ ದೃಶಿಗೋಚರ ಏಷ ಆವಿರಾತ್ಮಾ ॥ ೪೧ ॥

ಮಾತನ್ನು ಕೇಳಿ, ಒಡನೆಯೇ ಸ್ವಸೈನ್ಯ ಮತ್ತು ಶತ್ರುಸೈನ್ಯಗಳ ಮಧ್ಯದಲ್ಲಿ ರಥವನ್ನು ನಿಲ್ಲಿಸಿದವನಾಗಿ, ಕೇವಲ ತನ್ನ ದೃಷ್ಟಿಯಿಂದಲೇ ಶತ್ರುಸೈನಿಕರ ಆಯುಸ್ಸನ್ನು ಕಸಿದು ಬಿಟ್ಟಿರುವ ಪಾರ್ಥಸಖನಾದ ಭಗವಾನ್ ಶ್ರೀಕೃಷ್ಣನಲ್ಲಿ ನನಗೆ ಪರಮಪ್ರೇಮವಿರಲಿ. ॥ ೩೫ ॥ ಅರ್ಜುನನು ದೂರದಿಂದ ಕೌರವ ಸೇನೆಯ ಮುಖ್ಯಸ್ಥರಾದ ನಮ್ಮನ್ನು ನೋಡಿದಾಗ ಯುದ್ಧಮಾಡುವುದು ಪಾಪವೆಂದು ತಿಳಿದು, ಅವನು ಸ್ವಜನ ವಧೆಯಿಂದ ವಿಮುಖನಾದನು. ಆಗ ಯಾವ ಜ್ಞಾನಮೂರ್ತಿಯು ಶ್ರೀಗೀತೆಯೆಂಬ ಆತ್ಮವಿದ್ಯೆಯನ್ನು ಉಪದೇಶಿಸಿ, ಅವನ ಮೋಹವನ್ನು ಹೋಗಲಾಡಿಸಿದನೋ ಅಂತಹ ಪರಮ ಪುರುಷ ಭಗವಾನ್ ಶ್ರೀಕೃಷ್ಣನ ಚರಣಗಳಲ್ಲಿ ನನ್ನ ಪ್ರೀತಿಯು ಸ್ಥಿರವಾಗಿರಲಿ. ॥ ೩೬ ॥ 'ಶ್ರೀಕೃಷ್ಣನು ಯುದ್ಧದಲ್ಲಿ ಶಸ್ತ್ರವನ್ನು ಧರಿಸುವಂತೆ ಮಾಡಿಬಿಡುತ್ತೇನೆ' ಎಂದು ನಾನು ಪ್ರತಿಜ್ಞೆ ಮಾಡಿದ್ದೆ. 'ನಾನು ಯುದ್ಧದಲ್ಲಿ ಶಸ್ತ್ರವನ್ನು ಹಿಡಿಯುವುದಿಲ್ಲ' ಎಂದು ಶ್ರೀ ಕೃಷ್ಣನು ಪ್ರತಿಜ್ಞೆ ಮಾಡಿದ್ದನು. ಆದರೆ ಭಕ್ತನಾದ ನನ್ನ ಪ್ರತಿಜ್ಞೆಯನ್ನು ನಿಜವಾಗಿಸುವುದಕ್ಕಾಗಿ ತನ್ನ ಶಪಥವನ್ನೇ ಮುರಿದು, ಸ್ವಾಮಿಯು ರಥದಿಂದ ಕೆಳಗೆ ಧುಮುಕಿ, ಸಿಂಹವು ಆನೆಯನ್ನು ಸಂಹರಿಸಲು ಅದರ ಮೇಲೆ ಎರಗುವಂತೆ, ಚಕ್ರವನ್ನೆತ್ತಿಕೊಂಡು ನನ್ನ ಮೇಲೆರಗಲು ರಭಸದಿಂದ ಧಾವಿಸಿ ಬರುತ್ತಿರುವಾಗ ಭೂಮಿಯು ನಡುಗಿತು. ಹೆಗಲಲ್ಲಿ ಹೊತ್ತ ಉತ್ತರೀಯವು ಜಾರಿ ಬಿತ್ತು. ಇಂತಹ ಶ್ರೀಕೃಷ್ಣನಲ್ಲಿ ನನ್ನ ಪ್ರೀತಿಯು ಸ್ಥಿರವಾಗಲಿ. ॥ ೩೭ ॥ ಆತತಾಯಿಯಾದ ನಾನು ತೀಕ್ಷ್ಣವಾದ ಬಾಣಗಳನ್ನು ಹೊಡೆದು ಅವನ ಕವಚವನ್ನು ತುಂಡರಿಸಿದ್ದೆ. ಆದರಿಂದ ಅವನ ಇಡೀ ಶರೀರವು ರಕ್ತದಿಂದ ತೊಯ್ದು ಹೋಗಿತ್ತು. ಅರ್ಜುನನು ತಡೆಯುತ್ತಿದ್ದರೂ ಕೇಳದೆ ನನ್ನನ್ನು ಕೊಂದೇ ಹಾಕುವೆನೆಂದು ಬಲವಂತವಾಗಿ ಯಾವಾತನು ನನ್ನನ್ನು ಅನುಗ್ರಹಿಸಲು ನನ್ನ ಕಡೆಗೆ ಓಡಿ ಬಂದನೋ, ಅಂತಹ ಭಕ್ತವತ್ಸಲನಾದ ಭಗವಾನ್ ಶ್ರೀಕೃಷ್ಣನೇ ನನಗೆ ಗತಿಯಾಗಲಿ ; ಆಶ್ರಯವಾಗಲಿ. ॥ ೩೮ ॥ ಅರ್ಜುನನ ರಥದ ಸಾರಥಿಯಾಗಿ ಒಂದು ಕೈಯಲ್ಲಿ ಚಾವಟಿಗೆಯನ್ನೂ, ಮತ್ತೊಂದು ಕೈಯಲ್ಲಿ ಕುದುರೆಗಳ ವಾಘೆಗಳನ್ನು ಹಿಡಿದುಕೊಂಡು, ಆ ವೇಷದಲ್ಲಿಯೂ ಅತ್ಯಂತ ರಮಣೀಯದರ್ಶನನಾಗಿದ್ದ ಪ್ರಭುವನ್ನು ನೋಡುತ್ತಾ ಮಹಾಭಾರತ ಯುದ್ಧದಲ್ಲಿ ಮಡಿದವರೆಲ್ಲರೂ ಆತನ ಸಾರೂಪ್ಯ ಮುಕ್ತಿಯನ್ನೇ ಪಡೆದರೋ, ಅಂತಹ ಪಾರ್ಥಸಾರಥಿ ಭಗವಾನ್ ಶ್ರೀಕೃಷ್ಣನಲ್ಲಿ ಮರಣಾಸನ್ನನಾದ ನನಗೆ ಪರಮ ಪ್ರೀತಿ ಉಂಟಾಗಲಿ. ॥ ೩೯ ॥ ಯಾರ ಹಾವ-ಭಾವಗಳಿಂದ ಕೂಡಿದ ವಿಲಾಸ, ಮಧುರವಾದ ಮಂದಹಾಸ, ಬೆಡಗು, ಬಿನ್ನಾಣ, ಪ್ರೇಮಯುಕ್ತವಾದ ಕಡೆಗಣ್ಣ ನೋಟದಿಂದ ಅತ್ಯಂತ ಸಮ್ಮಾನಿತರಾದ ಗೋಪಿಯರು ರಾಸಲೀಲೆಯಲ್ಲಿ ಅವನು ಅಂತರ್ಧಾನನಾದಾಗ ಪ್ರೇಮೋನ್ಮತ್ತರಾಗಿ ಅವನ ಆ ದಿವ್ಯಲೀಲೆಗಳನ್ನು ಅನುಕರಣೆ ಮಾಡುತ್ತಾ ತನ್ಮಯರಾಗಿ ಬಿಟ್ಟರೋ, ಅಂತಹ ಭಗವಾನ್ ಶ್ರೀಕೃಷ್ಣನಲ್ಲಿ ನನಗೆ ಪರಮ ಪ್ರೇಮವು ಉಂಟಾಗಲಿ. ॥ ೪೦ ॥ ಮಹಾಮುನಿಗಳೂ, ರಾಜಶ್ರೇಷ್ಠರೂ ನೆರೆದಿದ್ದ ಧರ್ಮರಾಜನ ರಾಜಸೂಯ ಯಜ್ಞದ ಸಭೆಯಲ್ಲಿ ಮೊಟ್ಟಮೊದಲಿಗೆ ಯಾರ ಅಗ್ರಪೂಜೆಯು ನನ್ನ ಕಣ್ಣಮುಂದೆಯೇ ನಡೆಯಿತೋ, ಅಂತಹ